# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)

ಮೂರನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 07ನೇ ಫೆಬ್ರವರಿ, 2019

(ಸಮಯ: ಬೆಳಿಗ್ಗೆ 11.00 ಗಂಟೆಗೆ)

----

### 1. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಮಾನ್ಯ ಸದಸ್ಯರುಗಳಿಗೆ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೊದಲನೇ ಮತ್ತು ಎರಡನೇ ಪಟ್ಟಿ ರೀತ್ಯಾ.

### 2. ಚುನಾವಣಾ ಪ್ರಸ್ತಾವ

**ಡಾ: ಜಿ.ಪರಮೇಶ್ವರ್** (ಮಾನ್ಯ ಉಪ ಮುಖ್ಯಮಂತ್ರಿಗಳು) ಅವರು:–

1992ನೇ ಸಾಲಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಅಧಿನಿಯಮದ ಪ್ರಕರಣ 18(1)(8)ರ ಅನ್ವಯ ವರ್ಗಾಯಿಸಬಹುದಾದ ಒಂಟಿ ಮತದ ಮೂಲಕ ದಾಮಾಷಾ ಪ್ರಾತಿನಿಧ್ಯದ ತತ್ವದ ಆಧಾರದ ಮೇಲೆ ಈ ಸಭೆಯು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ವ್ಯವಸ್ಥಾಪನಾ ಮಂಡಳಿಗೆ ಇಬ್ಬರು ಸದಸ್ಯರನ್ನು ಚುನಾಯಿಸಬೇಕೆಂದು ಸೂಚಿಸುವುದು.

### 3. ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

"ದಿನಾಂಕ 06ನೇ ಫೆಬ್ರವರಿ, 2019ರ ಬುಧವಾರದಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರುಗಳನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಮಾನ್ಯ ರಾಜ್ಯಪಾಲರವರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ"

ಎಂದು **ಶ್ರೀ ಈಶ್ವರ ಬಿ. ಖಂಡ್ರೆ** ಅವರು ಸೂಚಿಸುವುದು.

**ಶ್ರೀ ಹೆಚ್.ಕೆ.ಕುಮಾರಸ್ವಾಮಿ** ಅವರು ಅನುಮೋದಿಸುವುದು.

## 4. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1) **ಶ್ರೀಯುತರುಗಳಾದ ಹೆಚ್. ಹಾಲಪ್ಪ, ವಿಶ್ವೇಶ್ವರ ಹೆಗಡೆ ಕಾಗೇರಿ, ಅರಗ ಜ್ಞಾನೇಂದ್ರ ಮತ್ತು ಎಸ್. ಕುಮಾರ ಬಂಗಾರಪ್ಪ ಇವರುಗಳು** – ಸಾಗರ ತಾಲ್ಲೂಕಿನ ಅರಳಗೋಡಿನಲ್ಲಿ ಕಾಣಿಸಿಕೊಂಡಿರುವ ಮಾರಣಾಂತಿಕ ಮಂಗನ ಕಾಯಿಲೆಯು ತಾಲ್ಲೂಕಿನಾದ್ಯಂತ ಹರಡುತ್ತಿದ್ದು ಅದನ್ನು ನಿಯಂತ್ರಿಸಲು ಅಗತ್ಯ ಕ್ರಮ ಕೈಗೊಳ್ಳುವ ಬಗ್ಗೆ ಚರ್ಚಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

## 5. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ಎಸ್. ಕುಮಾರ ಬಂಗಾರಪ್ಪ ಅವರು** – ಗ್ರಾಮ ಪಂಚಾಯಿತಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ತಮಗೆ ವಹಿಸಿರುವ ಕೆಲಸ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಲು ಅನುಕೂಲವಾಗುವಂತೆ ಗ್ರಾಮ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ ಹುದ್ದೆಗಳನ್ನು ಗ್ರೂಪ್ 'ಬಿ' (ಗೆಜೆಟೆಡ್) ವೃಂದಕ್ಕೆ ಸೇರ್ಪಡೆ ಮಾಡುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

2) **ಶ್ರೀ ಅರವಿಂದ ಚಂದ್ರಕಾಂತ ಬೆಲ್ಲದ ಅವರು** – ರಾಜ್ಯದ ಸರ್ಕಾರಿ ಪ್ರಾಥಮಿಕ ಹಾಗೂ ಪ್ರೌಢಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಕ್ರೀಡಾ ಕ್ಷೇತ್ರಗಳಲ್ಲಿ ಆಸಕ್ತಿ ಬೆಳೆಸಿಕೊಳ್ಳಲು ಅನುಕೂಲವಾಗುವಂತೆ ಹಾಗೂ ಅಂತರಾಷ್ಟ್ರೀಯ ಮಟ್ಟದ ಕ್ರೀಡಾಪಟುಗಳನ್ನು ತಯಾರು ಮಾಡುವ ನಿಟ್ಟಿನಲ್ಲಿ ಎನ್.ಎಸ್.ಎ. (ನ್ಯಾಷನಲ್ ಸ್ಪೋರ್ಟ್ಸ್ ಅಕಾಡೆಮಿ) ತರಬೇತಿದಾರರನ್ನು ಎಲ್ಲಾ ಆಟದ ಮೈದಾನಗಳಲ್ಲಿ ನೇಮಕ ಮಾಡುವ ಬಗ್ಗೆ ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರ ಗಮನ ಸೆಳೆಯುವುದು.

3) **ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. ಅವರು** – ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ನಿರ್ಮಾಣಕ್ಕಾಗಿ ಜಮೀನುಗಳನ್ನು ಕಳೆದುಕೊಂಡ ರೈತರುಗಳಿಗೆ ದೇವನಹಳ್ಳಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಸರ್ಕಾರಿ ಜಮೀನುಗಳನ್ನು ಗುರುತಿಸಿ ನಿವೇಶನಗಳನ್ನು ಹಂಚಿಕೆ ಮಾಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

4) **ಶ್ರೀ ಅಬ್ಬಯ್ಯ ಪ್ರಸಾದ್ ಅವರು** – ಧಾರವಾಡ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ತಹಸೀಲ್ದಾರ್ ಕಛೇರಿಗಳಲ್ಲಿ ವಿಧವಾ ವೇತನ, ವೃದ್ಧಾಪ್ಯ ವೇತನ, ವಿಕಲಚೇತನ ಪಿಂಚಣಿ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ವಿತರಣೆಯಲ್ಲಿ ಸಾರ್ವಜನಿಕರಿಗೆ ಆಗುತ್ತಿರುವ ತೊಂದರೆಗಳ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

**ಎಂ.ಕೆ.ವಿಶಾಲಾಕ್ಷಿ**
**ಕಾರ್ಯದರ್ಶಿ(ಪ್ರ)**

---

ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ಅಂತರ್ಜಾಲದ ಈ ವಿಳಾಸದಲ್ಲಿ ಪಡೆದುಕೊಳ್ಳಬಹುದು
***http://kla.kar.nic.in/assembly/lob/lob.htm***